





**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسۡمِ اللّٰهِ الرَّحۡمٰنِ الرَّحِيۡمِ

1. ಮಹಾ ದುರಂತ!

اَلۡقَارِعَةُ ۙ ١

2. ಏನದು ಮಹಾ ದುರಂತ?

مَا الۡقَارِعَةُ ۚ ٢

3. ಆ ಮಹಾ ದುರಂತವೇನೆಂದು ನಿಮಗೇನು ಗೊತ್ತು?

وَمَاۤ اَدۡرٰٮكَ مَا الۡقَارِعَةُ ؕ ٣

4. ಅಂದು ಜನರು ಚದುರಿದ ಹಾತೆಗಳಂತಾಗುವರು-

يَوۡمَ يَكُوۡنُ النَّاسُ كَالۡفَرَاشِ الۡمَبۡثُوۡثِ ۙ ٤

5. ಮತ್ತು ಪರ್ವತಗಳು ಬಣ್ಣ ಬಣ್ಣದ ಹಿಂಜಿದ ಉಣ್ಣೆಯಂತಾಗಿ ಬಿಡುವುದು.

وَتَكُوۡنُ الۡجِبَالُ كَالۡعِهۡنِ الۡمَنۡفُوۡشِ ؕ ٥

6. ತರುವಾಯ ಯಾರ ತೂಕದ ತಟ್ಟೆಗಳು ಭಾರವಾಗಿರುವುವೋ-[1]

فَاَمَّا مَنۡ ثَقُلَتۡ مَوَازِيۡنُهٗ ۙ ٦

7. ಅವನು ಮನೋಹರವಾದ ಸುಖಭೋಗದಲ್ಲಿರುವನು.

فَهُوَ فِىۡ عِيۡشَةٍ رَّاضِيَةٍ ؕ ٧

8. ಮತ್ತು ಯಾರ ತೂಕದ ತಟ್ಟೆಗಳು ಹಗುರವಾಗಿರುವುವೋ-

وَاَمَّا مَنۡ خَفَّتۡ مَوَازِيۡنُهٗ ۙ ٨

9. ಅವನ ನಿವಾಸವು ಆಳವಾದ ಹೊಂಡವಾಗಿರುವುದು.

فَاُمُّهٗ هَاوِيَةٌ ؕ ٩

10. ಅದೇನೆಂದು ನಿಮಗೇನು ಗೊತ್ತು?

وَمَاۤ اَدۡرٰٮكَ مَا هِيَهۡ ؕ ١٠

11. ಧಗಧಗಿಸುವ ಅಗ್ನಿಯದು.

نَارٌ حَامِيَةٌ ١١

---

1. ಅರ್ಥಾತ್- ಒಳಿತಿನ ತಟ್ಟೆ ಭಾರವಾಗಿರುವವರು.